KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೨೫, ೨೦೦೯ (ಆಷಾಢ ೪, ಶಕ ವರ್ಷ ೧೯೩೧) | ಸಂಚಿಕೆ ೨೬ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ**

**ಸಾರ್ವಜನಿಕ ಪ್ರಕಟಣೆ**

**ನಮೂನೆ 27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

**ನಂ. ಎಲ್‌ಎನ್‌ಡಿ.ಸಿಆರ್/290/2008–09, ದಿನಾಂಕ: 4ನೇ ಫೆಬ್ರವರಿ 2009**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಖರಾಬುಕಟ್ಟೆ/ಧರ್ಮದ ತೋಪು/ಸರ್ಕಾರಿ ಕಟ್ಟೆ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಸರ್ಕಾರಿ ಖರಾಬುಕಟ್ಟೆ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸರ್ಕಾರಿ ಖರಾಬು ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಸರ್ಕಾರಿ ಖರಾಬು ಕಟ್ಟೆ ಹಕ್ಕಿನ ಜೊತೆಗೆ ಸದರಿ ಸರ್ಕಾರಿ ಖರಾಬು ಕಟ್ಟೆ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಣಾಮಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು. ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಗ್ರಾಮಗಳು | ಕನ್ನಮಂಗಲ |
| ತಾಲ್ಲೂಕು | ಬೆಂಗಳೂರು ಪೂರ್ವ |
| ಜಿಲ್ಲೆ | ಬೆಂಗಳೂರು ನಗರ |
| ಜಮೀನಿನ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸ.ನಂ. 207 ರಲ್ಲಿ 0–25 ಗುಂ. ಖರಾಬು ಕಟ್ಟೆಯಲ್ಲಿ 0–10 ಗು. ಜಮೀನು |
| ಜಮೀನಿನ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | ಸಂ.207ರಲ್ಲಿ 0–25 ಗು ಜಮೀನಿನಲ್ಲಿ 0–10 ಗು. ಜಮೀನು. |
| ಮೇರೆ | ಪೂರ್ವಕ್ಕೆ: ಸ.ನಂ. 202ರ ಜಮೀನು<br>ಪಶ್ಚಿಮಕ್ಕೆ: ಸ.ನಂ. 207ರ ಉಳಿಕೆ ಜಮೀನು<br>ಉತ್ತರಕ್ಕೆ: ಸ.ನಂ. 202, ದಕ್ಷಿಣಕ್ಕೆ ಸ.ನಂ. 206 |
| ಸಾರ್ವಜನಿಕ ಸರ್ಕಾರಿ ಖರಾಬು ಕಟ್ಟೆ ಅಥವಾ ಅದರ ಭಾಗ | 0–10 ಗು. ಜಮೀನನ್ನು ಸಕ್ರಮಗೊಳಿಸುವ ಬಗ್ಗೆ. |

ಪಿ.ಆರ್. 221 ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂ.ಕೆ.ಎಸ್.ಎ:ಸಿ.ಆರ್:19/05–06, ದಿನಾಂಕ: 29ನೇ ಏಪ್ರಿಲ್ 2009**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ರಡಿ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ನಾಯಂಡಹಳ್ಳಿ ಗ್ರಾಮದ ವಿನಾಯಕ ಬಡಾವಣೆ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ. ನಂ. | ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ವಿನಾಯಕ ಬಡಾವಣೆ ಕೊಳಚೆ ಪ್ರದೇಶ, ನಾಯಂಡಹಳ್ಳಿ ಗ್ರಾಮ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು | ಐ.ಟಿ.ಐ. ಗೃಹ ನಿರ್ಮಾಣ ಸಹಕಾರ ಸಂಘ | 63/2 | 0.20 | ರಸ್ತೆ | ಖಾಲಿ ಪ್ರದೇಶ | ಖಾಲಿ ನಿವೇಶನ ಗಳು | ಖಾಸಗಿ ಮನೆಗಳು |

**ಜಿ.ಎನ್. ನಾಯಕ್**

ಪಿ.ಆರ್. 222 ಜಿಲ್ಲಾಧಿಕಾರಿಗಳು,

ಬೆಂಗಳೂರು ಜಿಲ್ಲೆ, ಬೆಂಗಳೂರು.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು**

**ಸಂ:ಎಲ್‌ಎನ್‌ಡಿ:ಸಿಆರ್:173:08–09, ದಿನಾಂಕ: 21ನೇ ಮೇ 2009**

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು ಬೇಗೂರು ಹೋಬಳಿ ಚಿಕ್ಕತೋಗೂರು ಗ್ರಾಮದ ಸ ನಂ:42:4, 5, 6 7, 8 ರಲ್ಲಿ ಒಟ್ಟು 0–06 ಗುಂಟೆ 'ಬಿ' ಖರಾಬು ಜಮೀನಿನ ಸಾರ್ವಜನಿಕ ಹಕ್ಕು ನಿವೃತ್ತಿಗೊಳಿಸುವ ಬಗ್ಗೆ.

**ಉಲ್ಲೇಖ:**
1. ರಾಜಸ್ವ ನಿರೀಕ್ಷಕರು ವರದಿ ಸಂ:ರಾನಿ(ಬೊ)ಪಿಆರ್ 90:08–09 ದಿನಾಂಕ: 29.10.2008.
2. ತಾಲ್ಲೂಕು ಮೋಜಣಿದಾರರು ರಚಿಸಿರುವ ನಕ್ಷೆ ಮತ್ತು ವರದಿ
3. ಸರ್ಕಾರದ ಪತ್ರ ಸಂ:ಆರ್‌ಡಿ:226:ಎಲ್‌ಜಿಬಿ:2009 ದಿನಾಂಕ: 24.4.2009.
4. ವಿಶೇಷ ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ ರವರ ಪತ್ರ ಸಂ. ಎಲ್‌ಎನ್‌ಡಿ (ದ) ಸಿಆರ್ 577: 08–09 ದಿನಾಂಕ: 14.5.2009.

ಕರ್ನಾಟಕ ಭೂ ಕಂದಾಯ ಕಾಯಿದೆ 1964 ರ ಅಡಿಯಲ್ಲಿ ಕಲಂ 68(1) ರಡಿಯಲ್ಲಿ ಹಾಗೂ ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ಅಡಿಯಲ್ಲಿನ ನಿಯಮ 94ರ ಅಡಿಯಲ್ಲಿ

**ಅಧಿಸೂಚನೆ**

ಬೆಂಗಳೂರು ದಕ್ಷಿಣ ತಾಲ್ಲೂಕು ಬೇಗೂರು ಹೋಬಳಿ ಚಿಕ್ಕತೋಗೂರು ಗ್ರಾಮ ಸ ನಂ:42:4, 5, 6, 7, 8 ರಲ್ಲಿ ಒಟ್ಟು 0.–06 ಗುಂಟೆ 'ಬಿ' ಖರಾಬು ಜಮೀನು ಬಂಡಿದಾರಿ ಎಂದು ವರ್ಗೀಕೃತವಾಗಿದ್ದು ಆದರೆ ಇದು ಸಾರ್ವಜನಿಕ ಉಪಯೋಗಕ್ಕೆ ಬಳಕೆಯಾಗಿರುವುದಿಲ್ಲವೆಂಬುದನ್ನು ಉಲ್ಲೇಖ (1) ಮತ್ತು (2) ರಲ್ಲಿನ ವರದಿಗಳಂತೆ ಮನಗಂಡು ಹಾಗೂ ಸದರಿ ಜಮೀನು ತನ್ನ ಲಕ್ಷಣವನ್ನು ಕಳೆದುಕೊಂಡಿರುವುದು ಕಂಡು ಬಂದಿದ್ದು ಸದರಿ ಜಮೀನಿನ ಸಾರ್ವಜನಿಕರ ಅಥವಾ ಯಾವುದೇ ವ್ಯಕ್ತಿಯ/ಗಳ ಹಿತಾಸಕ್ತಿಯು ಇರುವುದಿಲ್ಲವೆಂದು ಪರಿಗಣಿಸಿ ಅದರಲ್ಲಿನ ಸಾರ್ವಜನಿಕ ಹಕ್ಕು ಹಿತಾಸಕ್ತಿಯನ್ನು ನಿವೃತ್ತಿಗೊಳಿಸಲು ನಿರ್ಧರಿಸಲಾಗಿದೆ.

ಯಾವುದೇ ವ್ಯಕ್ತಿಯು ಅಥವಾ ವ್ಯಕ್ತಿಗಳು ಅಲ್ಲದೆ ಸಾರ್ವಜನಿಕರು ಸದರಿ ಜಮೀನಿನ ಸಾರ್ವಜನಿಕ ಹಕ್ಕನ್ನು ರದ್ದುಪಡಿಸುವುದರ ಬಗ್ಗೆ ತಮ್ಮದೇ ಆದ ಯಾವುದೇ ವಿಧವಾದ ಏನಾದರೂ ಆಕ್ಷೇಪಣೆಗಳಿದ್ದಲ್ಲಿ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 90 ದಿವಸಗಳೊಳಗಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು ರವರಿಗೆ ಅಂತಹ ಆಕ್ಷೇಪಣೆಗಳನ್ನು ಲಿಖಿತದ ಮೂಲಕ ಸಲ್ಲಿಸಬಹುದಾಗಿದೆ.

ಪಿ.ಆರ್. 223 ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ:ಎಲ್.ಎನ್.ಡಿ(ಎ) ಸಿ.ಆರ್: 178/07–08, ದಿನಾಂಕ: 25ನೇ ಮೇ 2009**

**ವಿಷಯ:** ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಬಗ್ಗನದೊಡ್ಡಿ ಗ್ರಾಮದ ಸ.ನಂ.96ರಲ್ಲಿನ 96.00 ಎಕರೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ ಆರ್.ಡಿ. 265 ಎಲ್.ಜಿ.ಬಿ. 2007 (ಭಾಗ–6) ಬೆಂಗಳೂರು, ದಿನಾಂಕ: 18.10.2007.
2. ಸರ್ಕಾರದ ಪತ್ರದ ಸಂಖ್ಯೆ ಕಂ.ಇ. 265 ಎಲ್.ಜಿ.ಬಿ. 2007 (ಪಿ6) ಬೆಂಗಳೂರು, ದಿನಾಂಕ: 27.1.2009.
3. ಜಂಟಿ ಆಯುಕ್ತರು (ಆಸ್ತಿಗಳು) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ಪತ್ರದ ಸಂಖ್ಯೆ ಎಲ್.ಎ.ಕ್ಯೂ:ಸಿ.ಆರ್:2/09–10, ದಿನಾಂಕ: 24.4.2009.
4. ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರ ಪತ್ರದ ಸಂಖ್ಯೆ ಎಲ್.ಎನ್.ಡಿ: ಸಿ.ಆರ್:313/07–08

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ ಜಮೀನಿನ ಪೈಕಿ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಜಮೀನು ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಜಮೀನನ್ನು ಮಂಜೂರಾತಿ ಮಾಡುವ ಬಗ್ಗೆ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ(1) ರಲ್ಲಿನ ಸರ್ಕಾರದ ಆದೇಶದಲ್ಲಿ ಅನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಬಗ್ಗನದೊಡ್ಡಿ ಗ್ರಾಮದ ಸ.ನಂ.96ರಲ್ಲಿನ 96.00 ಎಕರೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಾರ್ಗಸೂಚಿ ದರದ ಶೇಕಡಾ 50 ರಷ್ಟು ಬೆಲೆ ನಿಗದಿಪಡಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ)ರಂತೆ ಮಂಜೂರು ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ

ಸರ್ಕಾರದ ಅನುಮತಿಯಂತೆ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರಿಗೆ ಮಾರ್ಗಸೂಚಿ ಬೆಲೆಯ ಶೇ.50 ರಂತೆ ವಿಧಿಸಿದ ಕಿಮ್ಮತ್ತು ಮತ್ತು ಇತರೆ ಶುಲ್ಕಗಳನ್ನು ಸೇರಿ ಒಟ್ಟು 8,87,27,095–00 ಗಳನ್ನು ಪಾವತಿಸಲು ದಿನಾಂಕ:14.11.2007 ರಂದು ತಿಳುವಳಿಕೆ ನೀಡಲಾಗಿತ್ತು. ಆದರೆ ಉಲ್ಲೇಖ(2)ರ ಸರ್ಕಾರದ ಆದೇಶದಲ್ಲಿ ಪ್ರಶ್ನಿತ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಉಚಿತವಾಗಿ ಮಂಜೂರು ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ. ಸರ್ಕಾರದ ಪೂರ್ವಾನುಮೋದನೆಯಂತೆ ಸದರಿ ಜಮೀನನ್ನು ಪಾಲಿಕೆಗೆ ಹಸ್ತಾಂತರಿಸಲು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಉಲೇಖ (1) ಹಾಗೂ (2)ರ ಸರ್ಕಾರದ ಆದೇಶದಂತೆ ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ ಬಗ್ಗನದೊಡ್ಡಿ ಗ್ರಾಮದ ಸ.ನಂ.96 ರಲ್ಲಿನ 96.00 ಎಕರೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4. ಸಂಸ್ಥೆಗೆ ಮಂಜೂರಾದ ಭೂಮಿಯ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5. ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6. ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೊಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7. ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
8. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದಲ್ಲಿ ಸರ್ಕಾರಕ್ಕೆ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
9. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
10. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
11. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
12. ಆರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2)ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.
13. ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

**ಹೆಚ್. ರಾಮಾಂಜನೇಯ**

ಪಿ.ಆರ್. 225 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ನಂ:ಎಲ್.ಎನ್.ಡಿ(ಎ) ಸಿ.ಆರ್: 179/07–08, ದಿನಾಂಕ: 25ನೇ ಮೇ 2009**

**ವಿಷಯ:** ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ತಮ್ಮನಾಯ್ಕನಹಳ್ಳಿ ಗ್ರಾಮದ ಸ.ನಂ.23ರಲ್ಲಿನ 207.24 ಎಕರೆ:ಗುಂಟೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ ಆರ್.ಡಿ. 265 ಎಲ್.ಜಿ.ಬಿ. 2007 (ಭಾಗ–6) ಬೆಂಗಳೂರು, ದಿನಾಂಕ: 18.10.2007.
2. ಸರ್ಕಾರದ ಪತ್ರದ ಸಂಖ್ಯೆ ಕಂ.ಇ. 265 ಎಲ್.ಜಿ.ಬಿ. 2007(ಪಿ6) ಬೆಂಗಳೂರು, ದಿನಾಂಕ: 27.1.2009.
3. ಜಂಟಿ ಆಯುಕ್ತರು (ಆಸ್ತಿಗಳು) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ಪತ್ರದ ಸಂಖ್ಯೆ ಎಲ್.ಎ.ಕ್ಯೂ:ಸಿ.ಆರ್:2/09–10, ದಿನಾಂಕ: 24.4.2009.
4. ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರ ಪತ್ರದ ಸಂಖ್ಯೆ ಎಲ್.ಎನ್.ಡಿ: ಸಿ.ಆರ್:313/07–08

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ ಜಮೀನಿನ ಪೈಕಿ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಜಮೀನು ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಬಗ್ಗೆ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ(1) ರಲ್ಲಿನ ಸರ್ಕಾರದ ಆದೇಶದಲ್ಲಿ ಕಸಬಾ ಹೋಬಳಿ, ತಮ್ಮನಾಯ್ಕನಹಳ್ಳಿ ಗ್ರಾಮದ ಸ.ನಂ.23ರಲ್ಲಿನ 27.24 ಎಕರೆ:ಗುಂಟೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಾರ್ಗಸೂಚಿ ದರದ ಶೇಕಡಾ 50 ರಷ್ಟು ಬೆಲೆ ನಿಗದಿಪಡಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ)ರಂತೆ ಮಂಜೂರು ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ

ಸರ್ಕಾರದ ಅನುಮತಿಯಂತೆ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರಿಗೆ ಮಾರ್ಗಸೂಚಿ ಬೆಲೆಯ ಶೇ.50 ರಂತೆ ವಿಧಿಸಿದ ಕಿಮ್ಮತ್ತು ಮತ್ತು ಇತರೆ ಶುಲ್ಕಗಳನ್ನು ಸೇರಿ ಒಟ್ಟು 13,99,72,279–00 ಗಳನ್ನು ಪಾವತಿಸಲು ದಿನಾಂಕ:14.11.2007 ರಂದು ತಿಳುವಳಿಕೆ ನೀಡಲಾಗಿತ್ತು. ಆದರೆ ಉಲ್ಲೇಖ(2)ರ ಸರ್ಕಾರದ ಆದೇಶದಲ್ಲಿ ಪ್ರಶ್ನಿತ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಉಚಿತವಾಗಿ ಮಂಜೂರು ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ. ಸರ್ಕಾರದ ಪೂರ್ವಾನುಮೋದನೆಯಂತೆ ಸದರಿ ಜಮೀನನ್ನು ಪಾಲಿಕೆಗೆ ಹಸ್ತಾಂತರಿಸಲು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಉಲೇಖ (1) ಹಾಗೂ (2)ರ ಸರ್ಕಾರದ ಆದೇಶದಂತೆ ಕಸಬಾ ಹೋಬಳಿ, ತಮ್ಮನಾಯ್ಕನಹಳ್ಳಿ ಗ್ರಾಮದ ಸ.ನಂ.23 ರಲ್ಲಿನ 207.24 ಎಕರೆ:ಗುಂಟೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

### ಷರತ್ತುಗಳು

1. ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4. ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5. ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6. ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೊಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7. ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದಲ್ಲಿ ಸರ್ಕಾರಕ್ಕೆ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
9. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
10. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
11. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
12. ಆರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2)ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.
13. ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

**ಹೆಚ್. ರಾಮಾಂಜನೇಯ**

ಪಿ.ಆರ್. 226 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳವರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು

### ತಿದ್ದುಪಡಿ ಅಧಿಸೂಚನೆ

**ಪ್ರಕರಣ ಸಂಖ್ಯೆ: ಎಸ್.ಎಲ್.ಎ.ಒ.ಎಸ್.ಆರ್ 8/09-10, ದಿನಾಂಕ: 19ನೇ ಮೇ 2009**

ಭೂ ಸ್ವಾಧೀನ ಕಾಯ್ದೆ 1894 (ಸೆಂಟ್ರಲ್ ಕಾಯ್ದೆ 1894) ರ ಕಲಂ 4(1)ರ ಅಧಿಸೂಚನೆ ಸಂಖ್ಯೆ:ಎಲ್ಎಕ್ಯೂ ಎಸ್ಆರ್/48/2007-08 ದಿನಾಂಕ: 03.11.2007 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯು ದಿನಾಂಕ: 06.12.2007ರ ಕರ್ನಾಟಕ ರಾಜ್ಯಪತ್ರದ ಪುಟ 1140 ರಿಂದ 1146 ರವರೆಗೆ ಭಾಗ-6ರಲ್ಲಿ ಆಲದಹಳ್ಳಿ, ಕಣತ್ತೂರು, ಗೊಂದಿ ಗ್ರಾಮದ ಜಮೀನು ಹೇಮಾವತಿ ನಾಲಾ ಯೋಜನೆಗೆ ಪ್ರಕಟಗೊಂಡಿರುತ್ತದೆ. ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡ ತಪಶೀಲಿನಲ್ಲಿ ನಮೂದಿಸಿರುವಂತೆ ರದ್ದುಪಡಿ ಮಾಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ದಬ್ಬೇಘಟ್ಟ, ಕಸಬಾ
**ತಾಲ್ಲೂಕು:** ತುರುವೇಕೆರೆ **ಗ್ರಾಮ:** ಆಲದಹಳ್ಳಿ, ಕಣತ್ತೂರು, ಗೊಂದಿ

| 4(1) ರಂತೆ ಪ್ರಕಟವಾಗಿರುವುದು | | | | | ತಿದ್ದುಪಡಿಯಾಗಿರುವುದು | | |
|---|---|---|---|---|---|---|---|
| ಕ್ರ. ಸಂ. | 4(1) ಕ್ರ.ಸಂ. | ಸ.ನಂ. | ತರಹೆ | ವಿಸ್ತೀರ್ಣ | ಸ.ನಂ. | ತರಹೆ | ವಿಸ್ತೀರ್ಣ |
| "ಆಲದಹಳ್ಳಿ" | | | | | | | |
| 1 | 6 | 32/4 | ಇನಿಬಾ | 0-01 1/2<br>0-04 1/2 | 32/4 | ಖುಷ್ಕಿ<br>ಇನಿಬಾ | 0-01 1/2<br>0-04 1/2 |
| 2 | 20 | 26/5ಎ | ಖುಷ್ಕಿ | 0-02 | 26/5ಎ | ಇನಿಬಾ | 0-02 |
| "ಕಣತ್ತೂರು" | | | | | | | |
| 3 | 63 | 116/3 | ಸನಿಬಾ | 0-04 1/2 | 116/3<br>116/4<br>116/5 | ಸನಿಬಾ<br>ಸನಿಬಾ<br>ಸನಿಬಾ | 0-0 1/2<br>0-01 1/2<br>0-02 1/2 |

ಪಿ.ಆರ್. 228 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

### ರದ್ದಿಯಾತಿ ಅಧಿಸೂಚನೆ

**ಪ್ರಕರಣ ಸಂಖ್ಯೆ: ಎಲ್.ಎ.ಕ್ಯೂ.ಎಸ್.ಆರ್ 8/09-10, ದಿನಾಂಕ: 19ನೇ ಮೇ 2009**

ಭೂ ಸ್ವಾಧೀನ ಕಾಯಿದೆ 1894 (ಕೇಂದ್ರ ಕಾಯಿದೆ 1894)ರಂತೆ ವಿಧಿ 4(1)ರ ಅಧಿಸೂಚನೆ ಸಂಖ್ಯೆ:ಎಲ್ಎಕ್ಯೂ: ಎಸ್ಆರ್/48/2007-08, ದಿನಾಂಕ: 03.11.2007 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯ ದಿನಾಂಕ: 06.12.2007ರ ಕರ್ನಾಟಕ ರಾಜ್ಯ ಪತ್ರದ ಪುಟ ಸಂ. 1140 ರಿಂದ 1146 ರವರೆಗೆ ಭಾಗ-6ರಲ್ಲಿ ಆಲದಹಳ್ಳಿ, ಕಣತ್ತೂರು, ಗೊಂದಿ ಗ್ರಾಮಗಳ ಜಮೀನು ಹೇಮಾವತಿ ನಾಲಾ ಯೋಜನೆಗೆ ಭೂ ಸ್ವಾಧೀನಪಡಿಸಲು ಪ್ರಕಟಣೆ ಹೊರಡಿಸಿರುತ್ತದೆ. ಆದರೆ ಈ ಗ್ರಾಮಗಳ ಬಾಬ್ತು ಜಂಟಿ ಮೋಜಣಿ ಕಾರ್ಯ ಪೂರೈಸಿದಾಗ ಈ ಕೆಲಕಂಡ ಅನುಸೂಚಿಯಲ್ಲಿ ನಮೂದಿಸಿರುವ ಸರ್ವೆ ನಂಬರುಗಳ ಬಾಬ್ತು ಕಲಂ 4(1) ರಂತೆ ಪ್ರಕಟಿಸಲಾದ ವಿಸ್ತೀರ್ಣಕ್ಕಿಂತ ಕಡಿಮೆ ವಿಸ್ತೀರ್ಣ ಭೂ ಸ್ವಾಧೀನಕ್ಕೆ ಒಳಪಡುವುದೆಂದು ಕಂಡು ಬಂದಿರುವುದರಿಂದ ಕಲಂ 4(1) ರಲ್ಲಿ ಹೆಚ್ಚುವರಿಯಾಗಿ

ಪ್ರಕಟವಾಗಿದ್ದು, ವಿಸ್ತೀರ್ಣವನ್ನು ಹಾಗೂ ಭೂ ಸ್ವಾಧೀನಕ್ಕೆ ಪಡದ ವಿಸ್ತೀರ್ಣವನ್ನು ರದ್ದುಪಡಿಸಲು ರದ್ದಿಯಾತಿ ಅಧಿಸೂಚನೆ ಹೊರಡಿಸಿರುವುದಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ದಬ್ಬೇಘಟ್ಟ, ಕಸಬಾ

**ತಾಲ್ಲೂಕು:** ತುರುವೇಕೆರೆ **ಗ್ರಾಮ:** ಆಲದಹಳ್ಳಿ, ಕಣತ್ತೂರು, ಗೊಂದಿ

| ಕ್ರ. ಸಂ. | 4(1)ರ ಕ್ರ.ಸಂ. | ಹಿಡುವಳಿದಾರರ ಹೆಸರುಗಳು | ಸ.ನಂ. | ಭೂ ಸ್ವಾಧೀನಕ್ಕೊಳ ಪಡದ ಕಡಿಮೆಯಾದ ವಿಸ್ತೀರ್ಣ | ಷರಾ |
|---|---|---|---|---|---|
| | | **1) ಕಣತ್ತೂರು** | | | |
| 1 | 29 | ಕೆ.ಎಲ್. ಬೋರೇಗೌಡ ಬಿನ್ ಲಿಂಗೇಗೌಡ | 35/1 | 0–02 | ಕಮ್ಮಿ ಆಗಿದೆ |
| 2 | 64 | ಕೆ.ಹೆಚ್. ರಾಮಕೃಷ್ಣೇಗೌಡ ಬಿನ್ ಲೇ. ಹುಚ್ಚೇಗೌಡ, ಕೆ.ಕೆ. ಭೀಮೇಗೌಡ ಬಿನ್ ಕಪನಿಗೌಡ, ಕೆ.ಕೆ. ಭೀಮೇಗೌಡ ಬಿನ್ ಕಪನಿಗೌಡ | 115/1 | 0–02 | ನಾಲೆ ಹೋಗಿರುವುದಿಲ್ಲ |
| | | **2) ಗೊಂದಿ** | | | |
| 3 | 66 | ಬಿ.ಸಿ. ನರಸಿಂಹಮೂರ್ತಿ ಬಿನ್ ಫ. ಬಿ. ಚಂದ್ರಶೇಖರಯ್ಯ | 2/1 | 0–01 | ಕಮ್ಮಿ ಆಗಿದೆ |
| | | **ಒಟ್ಟು** | | **0–05** | |

ಪಿ.ಆರ್. 229 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.

## ಜಿಲ್ಲಾಧಿಕಾರಿಗಳವರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು

**ತಿದ್ದುಪಡಿ ಅಧಿಸೂಚನೆ ಪ್ರಕರಣ ಸಂಖ್ಯೆ: ಎಸ್.ಎಲ್.ಎ.ಓ.ಎಸ್.ಆರ್ 9/09–10, ದಿನಾಂಕ: 19ನೇ ಮೇ 2009**

ಭೂ ಸ್ವಾಧೀನ ಕಾಯ್ದೆ 1894 (ಸೆಂಟ್ರಲ್ ಕಾಯ್ದೆ 1894) ರ ಕಲಂ 4(1)ರ ಅಧಿಸೂಚನೆ ಸಂಖ್ಯೆ:ಎಲ್ಎಕ್ಯೂ ಎಸ್ಆರ್/47/2007–08 ದಿನಾಂಕ: 03.11.2007 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯು ದಿನಾಂಕ: 29.11.2007ರ ಕರ್ನಾಟಕ ರಾಜ್ಯಪತ್ರದ ಪುಟ 1130 ರಿಂದ 1136 ರವರೆಗೆ ಭಾಗ–6ರಲ್ಲಿ ಹೆಡಗಿಹಳ್ಳಿ, ಗೋಣಿತುಮಕೂರು ಗ್ರಾಮದ ಜಮೀನು ಹೇಮಾವತಿ ನಾಲಾ ಯೋಜನೆಗೆ ಪ್ರಕಟಗೊಂಡಿರುತ್ತದೆ. ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡ ತಪಶೀಲಿನಲ್ಲಿ ನಮೂದಿಸಿರುವಂತೆ ತಿದ್ದುಪಡಿ ಮಾಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ದಬ್ಬೇಘಟ್ಟ

**ತಾಲ್ಲೂಕು:** ತುರುವೇಕೆರೆ **ಗ್ರಾಮ:** ಹೆಡಗಿಹಳ್ಳಿ, ಗೋಣಿತುಮಕೂರು

| 4(1) ರಂತೆ ಪ್ರಕಟವಾಗಿರುವುದು | | | | | ತಿದ್ದುಪಡಿಯಾಗಿರುವುದು | | |
|---|---|---|---|---|---|---|---|
| ಕ್ರ. ಸಂ. | 4(1) ಕ್ರ.ಸಂ. | ಸ.ನಂ. | ತರಹೆ | ವಿಸ್ತೀರ್ಣ | ಸ.ನಂ. | ತರಹೆ | ವಿಸ್ತೀರ್ಣ |
| | | | | **ಗ್ರಾಮ: ಗೋಣಿತುಮಕೂರು** | | | |
| 1 | 11 | 221/5ಎ | ಖುಷ್ಕಿ<br>ಇನಿಬಾ | 0–02 1/2<br>0–06 1/2 | 221/5ಎ | ಭಾಗಾಯ್ತು | 0–09 |
| 2 | 63 | 190/3 | ಖುಷ್ಕಿ | 0–04 | 190/3 | ಭಾಗಾಯ್ತು | 0–04 |
| | | | | **ಗ್ರಾಮ: ಹೆಡಗಿಹಳ್ಳಿ** | | | |
| 3 | 10 | 29 | ಇನಿಬಾ | 0–06 | 29 | ಖುಷ್ಕಿ<br>ಇನಿಬಾ | 0–05<br>0–01 |
| 4 | 3 | 192/ಎ2 | ಇನಿಬಾ | 0–04 | 19/2ಎ2 | ಇನಿಬಾ | 0–04 |

ಪಿ.ಆರ್. 230 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

**ರದ್ದಿಯಾತಿ ಅಧಿಸೂಚನೆ ಪ್ರಕರಣ ಸಂಖ್ಯೆ: ಎಲ್.ಎ.ಕ್ಯೂ.ಎಸ್.ಆರ್ 10/09–10, ದಿನಾಂಕ: 19ನೇ ಮೇ 2009**

ಭೂ ಸ್ವಾಧೀನ ಕಾಯಿದೆ 1894 (ಸೆಂಟ್ರಲ್ ಕಾಯಿದೆ 1894)ರಂತೆ ವಿಧಿ 4(1)ರ ಅಧಿಸೂಚನೆ ಸಂಖ್ಯೆ:ಎಲ್ಎಕ್ಯೂ: ಎಸ್ಆರ್/49/2007–08, ದಿನಾಂಕ: 09.11.2007 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯ ದಿನಾಂಕ: 06.12.2007ರ ಕರ್ನಾಟಕ ರಾಜ್ಯ ಪತ್ರದ ಪುಟ ಸಂ. 1147 ರಿಂದ 1155 ರವರೆಗೆ ಭಾಗ–6ರಲ್ಲಿ ಕೊಡಗಿಹಳ್ಳಿ, ಹುರಳಗೆರೆ, ಮತ್ತಿಕೆರೆ ಗ್ರಾಮಗಳ ಜಮೀನು ಹೇಮಾವತಿ ನಾಲಾ ಯೋಜನೆಗೆ ಭೂ

ಸ್ವಾಧೀನಪಡಿಸಲು ಪ್ರಕಟಣೆ ಹೊರಡಿಸಿರುತ್ತದೆ. ಆದರೆ ಈ ಗ್ರಾಮಗಳ ಬಾಬ್ತು ಜಂಟಿ ಮೋಜಣಿ ಕಾರ್ಯ ಪೂರೈಸಿದಾಗ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಸರ್ವೆ ನಂಬರುಗಳ ಬಾಬ್ತು ಕಲಂ 4(1) ರಂತೆ ಪ್ರಕಟಿಸಲಾದ ವಿಸ್ತೀರ್ಣಕ್ಕಿಂತ ಕಡಿಮೆ ವಿಸ್ತೀರ್ಣ ಭೂ ಸ್ವಾಧೀನಕ್ಕೆ ಒಳಪಡುವುದೆಂದು ಕಂಡು ಬಂದಿರುವುದರಿಂದ ಕಲಂ 4(1) ರಲ್ಲಿ ಹೆಚ್ಚುವರಿಯಾಗಿ ಪ್ರಕಟವಾಗಿದ್ದು, ವಿಸ್ತೀರ್ಣವನ್ನು ಹಾಗೂ ಭೂ ಸ್ವಾಧೀನಕ್ಕೆ ಪಡದ ವಿಸ್ತೀರ್ಣವನ್ನು ರದ್ದುಪಡಿಸಲು ರದ್ದಿಯಾತಿ ಅಧಿಸೂಚನೆ ಹೊರಡಿಸಿರುವುದಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ಸಿ.ಎಸ್. ಪುರ

**ತಾಲ್ಲೂಕು:** ಗುಬ್ಬಿ **ಗ್ರಾಮ:** ಕೊಡಗೆನಹಳ್ಳಿ, ಹುರುಳಗೆರೆ, ಮತ್ತಿಕೆರೆ

| ಕ್ರ. ಸಂ. | 4(1)ರ ಕ್ರ.ಸಂ. | ಹಿಡುವಳಿದಾರರ ಹೆಸರುಗಳು | ಸ. ನಂ. | ಭೂ ಸ್ವಾಧೀನಕ್ಕೊಳ ಪಡದ ಕಡಿಮೆಯಾದ ವಿಸ್ತೀರ್ಣ | ಷರಾ |
|---|---|---|---|---|---|
| | | **1) ಕೊಡಗೆನಹಳ್ಳಿ** | | | |
| 1 | 1 | 1ನೇ ಹುಚ್ಚಮ್ಮ, 2ನೇ ಭಾಗ್ಯಮ್ಮ, 3ನೇ ಲಲಿತಮ್ಮ ಕೋಂ ಗಿರಿಗೌಡ | 19/1 | 0–01 | ಕಮ್ಮಿ ಆಗಿದೆ |
| 2 | 3 | ತಿಮ್ಮಯ್ಯ ಬಿನ್ ವೆಂಕಟರಮಣಯ್ಯ | 19/3 | 0–01 | ಕಮ್ಮಿ ಆಗಿದೆ |
| 3 | 5 | ಮೂಡ್ಲಿಗೌಡ ಬಿನ್ ಪಚ್ಚಪ್ಪ | 24/1 | 0–01 | ಕಮ್ಮಿ ಆಗಿದೆ |
| 4 | 15 | ವೆಂಕಟಯ್ಯ ಉ. ತಮ್ಮಯ್ಯ ಬಿನ್ ಗಿರಿಯಪ್ಪನಬಾರನ | 27/3 | 0–0 1/2 | ಕಮ್ಮಿ ಆಗಿದೆ |
| 5 | 25 | ಕೃಷ್ಣಯ್ಯ ಬಿನ್ ತಿಮ್ಮಯ್ಯ, ಟಿ. ಕೃಷ್ಣಯ್ಯ ಬಿನ್ ಲೇ ತಿಮ್ಮಯ್ಯ, ಗೋವಿಂದಯ್ಯ ಬಿನ್ ತಿಮ್ಮಯ್ಯ, ಟಿ. ಕೃಷ್ಣಯ್ಯ ಬಿನ್ ಲೇಟ್ ತಿಮ್ಮಯ್ಯ | 38/1 | 0–0 1/2 | ಕಮ್ಮಿ ಆಗಿದೆ |
| | | **2) ಹುರಳಗೆರೆ** | | | |
| 6 | 39 | ತಿರುಮಲಗಿರಿ ಬಿನ್ ಬ್ಯಾಟಯ್ಯ | 29/1 | 0–2 | ಕಮ್ಮಿ ಆಗಿದೆ |
| 7 | 42 | ತಳವಾರಿಕೆ ಇನಾಂ ದೊಡ್ಡನಾಗಯ್ಯ ಬಿನ್ ಕೆಂಪರಸಯ್ಯ, ರಂಗನಾಯ್ಕ ಬಿನ್ ಕೆಂಪರಸಯ್ಯ, ರಂಗನಾಯ್ಕ ಬಿನ್ ಕೆಂಪರಸಯ್ಯ, ರಂಗಮ್ಮ ಕೋಂ ನರಸಯ್ಯ ಕೆಂಪನಾಯ್ಕ ಬಿನ್ ಕೆಂಪರಸಯ್ಯ | 32/ಪಿ1 & ಪಿ2 | 0–01 | ಕಮ್ಮಿ ಆಗಿದೆ |
| 8 | 47 | ಲಕ್ಷ್ಮಣ ಬಿನ್ ಹುಚ್ಚೇಗೌಡ | 34 | 0–01 1/2 | ಕಮ್ಮಿ ಆಗಿದೆ |
| 9 | 49 | ನರಸಿಂಹಯ್ಯ ಬಿನ್ ಲೇಟ್ ಮೂಡ್ಲಿಗಿರಯ್ಯ | 35/5 | 0–01 | ನಾಲೆ ಹೋಗಿರುವುದಿಲ್ಲ |
| 10 | 56 | ಸಿದ್ದೇಗೌಡ ಬಿನ್ ಬೋರಯ್ಯ | 42/5 | 0–0 1/2 | ಕಮ್ಮಿ ಆಗಿದೆ |
| 11 | 64 | ವೆಂಕಟೇಶಯ್ಯ ಬಿನ್ ಮರಿಹುಚ್ಚಯ್ಯ | 53/3 | 0–0 1/2 | ಕಮ್ಮಿ ಆಗಿದೆ |
| 12 | 65 | ಕೆಂಪ ಬಿನ್ ಬೋರ, ಜಿ. ಬೆಟ್ಟಸ್ವಾಮಿಗೌಡ ಬಿನ್ ಗುಡ್ಡೇಗೌಡ, ಜಯಲಕ್ಷ್ಮಮ್ಮ ಕೋಂ ಲೇ.ಹುಚ್ಚಯ್ಯ, ಕೆಂಪಮ್ಮ ಕೋಂ ಹೆಚ್.ಕೆ. ಶಿವಣ್ಣ | 53/5 | 0–0 1/2 | ಕಮ್ಮಿ ಆಗಿದೆ |
| | | **3) ಮತ್ತಿಕೆರೆ** | | | |
| 13 | 74 | ತಿಮ್ಮಯ್ಯ ಬಿನ್ ಮೂಡ್ಲಗಿರಯ್ಯ | 36/1ಎ | 0–0 1/2 | ಕಮ್ಮಿ ಆಗಿದೆ |
| 14 | 75 | ತಿಮ್ಮಯ್ಯ ಬಿನ್ ಮೂಡ್ಲಗಿರಯ್ಯ | 36/1ಬಿ | 0–0 1/2 | ಕಮ್ಮಿ ಆಗಿದೆ |
| 15 | 81 | ಕೃಷ್ಣಪ್ಪ ಬಿನ್ ನರಸಿಂಹಯ್ಯ | 22/2 | 0–0 1/2 | ಕಮ್ಮಿ ಆಗಿದೆ |
| 16 | 89 | ನರಸಿಂಹಯ್ಯ ಬಿನ್ ಬೋರೇಗೌಡ, ಎಸ್.ಬಿ. ಶಿವಲಿಂಗಯ್ಯ ಬಿನ್ ಬೆಟ್ಟಯ್ಯ, ಲಕ್ಷ್ಮಿದೇವಮ್ಮ ಕೋಂ ತಮ್ಮಯ್ಯ, ಚಿಕ್ಕಮ್ಮ ಕೋಂ ನಿಂಗಯ್ಯ, ಸಿದ್ದಯ್ಯ ಬಿನ್ ಬೋರಯ್ಯ, ಗಂಗಾಧರಯ್ಯ ಬಿನ್ ಬೋರಯ್ಯ | 31 | 0–03 | ಕಮ್ಮಿ ಆಗಿದೆ |
| | | **ಒಟ್ಟು** | | **0–015 1/2** | |

ಪಿ.ಆರ್. 232 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.

## ಕಂದಾಯ ಸಚಿವಾಲಯ

**ಭೂಸ್ವಾಧೀನ ಅಧಿನಿಯಮದ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ 22 ಭೂಸ್ವಾತು 2009, ದಿನಾಂಕ: 28ನೇ ಏಪ್ರಿಲ್ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹೇಮಾವತಿ ನಾಲೆಗಾಗಿ ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894 ರ ಕಲಂ 4(1) ರ ಮೇರೆಗೆ ಅಧಿಸೂಚನೆ ಕ್ರಮಾಂಕ: ಎಲ್ಎಕ್ಯೂ/ಎಸ್ಆರ್/32/2007–08, ದಿನಾಂಕ: 19.10.2007ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ,

ಮತ್ತು ಕರ್ನಾಟಕ ಕಾಯ್ದೆ 33/1991 ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 ರ (ಕೇಂದ್ರ ಅಧಿನಿಯಮ 1894) (1) 5ಎ ಪ್ರಕರಣದ (2)ನೇ ಉಪಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಆರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ :** ತುಮಕೂರು **ತಾಲ್ಲೂಕು :** ತುರುವೇಕೆರೆ **ಹೋಬಳಿ :** ದಂಡಿನಶಿವರ/ಕಸಬ **ಗ್ರಾಮ :** ಕೊಂಡಜ್ಜಿ, ಶೆಟ್ಟಿಹಳ್ಳಿ (ಶ್ರೀರಾಂಪುರ), ರಾಯಸಂದ್ರ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| **1. ಗ್ರಾಮ: ಕೊಂಡಜ್ಜಿ** | | | | | | | | | | |
| 1. | ಕೆ.ಜಿ. ಗಂಗಾಧರಯ್ಯ ಬಿನ್ ಗಿರಿಯಪ್ಪ, ಕೆ.ಜಿ. ದ್ಯಾವೇಗೌಡ ಬಿನ್ ಗಿರಿಯಪ್ಪ ಕೆ.ಜಿ. ತಮ್ಮೇಗೌಡ ಬಿನ್ ಗಿರಿಯಣ್ಣ, ಕೆಂಪಮ್ಮ ಕೋಂ ಎಲ್. ರಂಗಪ್ಪ, ನಂಜಮ್ಮ ಕೋಂ ಎಚ್.ಬಿ. ಗೋವಿಂದಯ್ಯ, ಚಿಕ್ಕೇಗೌಡ ಬಿನ್ ಗಿರಿಗೌಡ, ಪರಮೇಶ್ ಬಿನ್ ಲೇ: ರಾಮೇಗೌಡ ಬ್ಯಾಟಪ್ಪ ಬಿನ್ ಲೇ: ರಾಮೇಗೌಡ | ಕೆ.ಜಿ. ಗಂಗಾಧರಯ್ಯ, ಕೆ.ಜಿ. ದೇವೇಗೌಡ, ಕೆ.ಜಿ. ತಮ್ಮೇಗೌಡ, ನಂಜಮ್ಮ, ಚಿಕ್ಕೇಗೌಡ, ಕೆಂಪಮ್ಮ ಕೋಂ ಎಲ್. ರಂಗಪ್ಪ, ಪರಮೇಶ್, ಬ್ಯಾಟಪ್ಪ | 274 | ಖುಷ್ಕಿ | ಉಳಿಕೆ | ಉಳಿಕೆ | 273 | 277 | 0–00 1/2 | 0–02 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 2. | ಗಂಗಾಧರಯ್ಯ ಬಿನ್ ನಿಂಗೇಗೌಡ, ಕೆ.ಜಿ. ಗಂಗಾಧರಯ್ಯ ಬಿನ್ ಗಿರಿಯಪ್ಪ,, ಗಿರಿಯಪ್ಪ, ಪರಮೇಶ್ ಬಿನ್ ಲೇ: ರಾಮೇಗೌಡ, ಬ್ಯಾಟಪ್ಪ ಬಿನ್ ಲೇ: ರಾಮೇಗೌಡ | ಗಂಗಾಧರಯ್ಯ, ಕೆ.ಜಿ. ಗಂಗಾಧರಯ್ಯ, ಪರಮೇಶ್, ಬ್ಯಾಟಪ್ಪ | 277/1 | ಖುಷ್ಕಿ | ಉಳಿಕೆ | ಉಳಿಕೆ | 274 | 619 | 0–09 | 0–31 |
| 3. | ಗಂಗಣ್ಣ ಬಿನ್ ಲೇಟ್ ಸಣ್ಣಬೋರೇಗೌಡ, ರಂಗಪ್ಪ ಬಿನ್ ಸಣ್ಣಬೋರೇಗೌಡ | ರಂಗಪ್ಪ, ಗಂಗಣ್ಣ | 304/1 | ಖುಷ್ಕಿ | ಉಳಿಕೆ | ಉಳಿಕೆ | 303 | 304/2 | 0–02 | 0–06 |
| 4. | ಚನ್ನಮ್ಮ ಕೋಂ ನಂಜಪ್ಪ | ಚನ್ನಮ್ಮ ಕೋಂ ನಂಜಪ್ಪ | 304/2 | ಖುಷ್ಕಿ | ಉಳಿಕೆ | ರಸ್ತೆ | 304/1 | 305/1 | 0–01 | 0–03 |
| 5. | ಲಕ್ಷ್ಮಮ್ಮ ಕೋಂ ಅಂದಾನಯ್ಯ | ಲಕ್ಷ್ಮಮ್ಮ | 305/1 | ಖುಷ್ಕಿ | ಉಳಿಕೆ | ರಸ್ತೆ | 304/2 | 254 | 0–02 | 0–07 |
| 6. | ಗೋವಿಂದಯ್ಯ ಬಿನ್ ನಾರಾಯಣಪ್ಪ, ಜಗದೀಶ ಮೈ.ಗಾ ತಿಮ್ಮನಾಯ್ಕ | ಗೋವಿಂದಯ್ಯ, ಜಗದೀಶ ಮೈ.ಗಾ ತಿಮ್ಮನಾಯ್ಕ | 619 | ಖುಷ್ಕಿ | 618/1 | ಉಳಿಕೆ | 277 | 618/2 | 0–03 $^{1}/_{2}$ | 0–12 |
| 7. | ಚಿಕ್ಕೇಗೌಡ ಬಿನ್ ಸಣ್ಣಗಿರಿಗೌಡ, ಪುಟ್ಟಶ್ಯಾಮಯ್ಯ ಬಿನ್ ಪುಟ್ಟೇಗೌಡ, ಶಿವಣ್ಣ ಬಿನ್ ಪುಟ್ಟೇಗೌಡ, ಸಣ್ಣಲಿಂಗಯ್ಯ ಬಿನ್ ಸಣ್ಣಗಿರಿಗೌಡ, ಲಕ್ಷ್ಮಮ್ಮ ಕೋಂ ಸಿದ್ದಪ್ಪ, ಗಂಗಾಧರ ಬಿನ್ ಸಿದ್ದಪ್ಪ | ಚಿಕ್ಕೇಗೌಡ, ಪುಟ್ಟಶ್ಯಾಮಯ್ಯ, ಶಿವಣ್ಣ, ಸಣ್ಣಲಿಂಗಯ್ಯ, ಲಕ್ಷ್ಮಮ್ಮ | 618/2 | ಖುಷ್ಕಿ | 618/1 | ಉಳಿಕೆ | 619 | ಉಳಿಕೆ | 0–01 1/2 | 0–05 |
| 8. | ಕೆ.ಜಿ. ಶಂಕರೇಗೌಡ ಬಿನ್ ಕೆ.ಸಿ. ಗಿರಿಗೌಡ | ಕೆ.ಜಿ. ಶಂಕರೇಗೌಡ | 622/2 | ಖುಷ್ಕಿ | 275 | ಉಳಿಕೆ | ಉಳಿಕೆ | 266 | 0–03 | 0–10 |
| | **ಒಟ್ಟು** | | | | | | | | **0–22 $^{1}/_{2}$** | **0–76** |
| | | | | **2. ಗ್ರಾಮ: ಶೆಟ್ಟಿಹಳ್ಳಿ (ಶ್ರೀರಾಂಪುರ)** | | | | | | |
| 9. | ಗೋಮಾಳ, ಸಿದ್ದರಾಮಯ್ಯ ಬಿನ್ ಹೆಂಜಯ್ಯಕೊಪ್ಪ, ಗಂಗಣ್ಣ ಬಿನ್ ಗೋವಿಂದಯ್ಯ | ಗೋಮಾಳ, ಸಿದ್ದರಾಮಯ್ಯ, ಗಂಗಣ್ಣ | 11 | ಖುಷ್ಕಿ | ಅಗ್ರಹಾರ ಗಡಿ ಮತ್ತು ನಾಲೆ | 10 | ಉಳಿಕೆ | ಉಳಿಕೆ | 0–14<br>0–07 | 0–48<br>0–24 |
| | **ಒಟ್ಟು** | | | | | | | | **0–21** | **0–72** |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| | | | **3. ಗ್ರಾಮ: ರಾಯಸಂದ್ರ** | | | | | | | |
| 10. | ತಿಮ್ಮಯ್ಯ ಬಿನ್ ಜುಂಜೇಗೌಡ, ಎಂ. ಗೋಪಿನಾಥ ಬಿನ್ ಜಿ. ಮರಿಯಪ್ಪ, ಎಂ.ಎಸ್. ಮುರಳೀಧರ ಬಿನ್ ಸಣ್ಣಪ್ಪಯ್ಯ, ಎಂ.ಎಸ್. ಮುರಳೀಧರ ಬಿನ್ ಸಣ್ಣಪ್ಪಯ್ಯ, ಮಹದೇವಯ್ಯ ಬಿನ್ ಶಿವಣ್ಣ, ಸುನಂದ ಕೋಂ ಮಹದೇವಯ್ಯ | ಟಿ. ತಿಮ್ಮಯ್ಯ, ಎಂ. ಗೋಪಿನಾಥ, ಎಂ.ಎಸ್. ಮುರಳೀಧರ, ಶಿವಣ್ಣ, ಶಿವಗಂಗಮ್ಮ, ಮಹದೇವಯ್ಯ, ಸುನಂದ | 78 | ಖುಷ್ಕಿ | 79/2,3 | 75 | ಉಳಿಕೆ | ಉಳಿಕೆ | 0–18 | 0–40 |
| 11. | ಆರ್.ಎನ್. ಮಲ್ಲಿಕಾರ್ಜುನಯ್ಯ, ಆರ್.ಎನ್. ಶಿವನಂಜಪ್ಪ | ಆರ್.ಎನ್. ಮಲ್ಲಿಕಾರ್ಜುನಯ್ಯ, ಆರ್.ಎನ್. ಶಿವನಂಜಪ್ಪ | 79/2 | ಭಾಗಾಯ್ತು | 83/1 | 78 | ಉಳಿಕೆ | 79/3 | 0–05 | 0–81 |
| 12. | ಗಂಗಮ್ಮ ಕೋಂ ಶಿವಲಿಂಗಯ್ಯ, ಆರ್.ಸಿ. ಪ್ರಭುಸ್ವಾಮಿ ಬಿನ್ ಚನ್ನಬಸವಯ್ಯ | ಗಂಗಾಧರಯ್ಯ, ಎಂ.ಎಸ್. ದಿವಾಕರ, ಆರ್.ಸಿ. ಪ್ರಭುಸ್ವಾಮಿ | 79/3ಬಿ | ಭಾಗಾಯ್ತು | 83/1 | 78 | 79/2 | ಉಳಿಕೆ | 0–05 | 0–81 |
| 13. | ಸ್ಮಿತಾ ಬಿನ್ ಮಲ್ಲಿಕಾರ್ಜುನಯ್ಯ, ಸಂತೋಷ್ | ಸ್ಮಿತಾ, ಸಂತೋಷ್ | 80/2 | ಭಾಗಾಯ್ತು | 81/3 | 83/1 | ಉಳಿಕೆ | 81/1,2 | 0–06 | 1–03 |
| 14. | ಸಣ್ಣಗಂಗಮ್ಮ ಕೋಂ ಶಿವಗಂಗಪ್ಪ | ಸಣ್ಣಗಂಗಮ್ಮ | 81/1 | ಭಾಗಾಯ್ತು | 81/2 | 83/1 | 80/2 | ಉಳಿಕೆ | 0–03 1/2 | 0–60 |
| 15. | ನಂಜುಂಡಮ್ಮ ಕೋಂ ಸಿದ್ದರಾಮಯ್ಯ | ನಂಜುಂಡಮ್ಮ | 81/2 | ಖುಷ್ಕಿ | 81/3 | 81/1 | 80/2 | ಉಳಿಕೆ | 0–02 1/2 | 0–10 |
| 16. | ನಂಜುಂಡಮ್ಮ ಕೋಂ ಬಸವೇಗೌಡ | ನಂಜುಂಡಮ್ಮ | 83/1 | ಭಾಗಾಯ್ತು | 81/1 | 79/2, 3 | ಉಳಿಕೆ | ಉಳಿಕೆ | 0–01 1/4 | 0–22 |
| 17. | ನಂಜಯ್ಯ ಬಿನ್ ಸಿದ್ರಾಮಯ್ಯ | ನಂಜಯ್ಯ | 105 | ಖುಷ್ಕಿ | 75 | 106 | 75 | ಉಳಿಕೆ | 0–03 | 0–10 |
| | **ಒಟ್ಟು** | | | | | | | | **1–04 1/4** | **4–07** |

**ಘೋಷ್ವಾರೆ**

| ಕ್ರ. ಸಂ. | ಗ್ರಾಮಗಳು | ಖುಷ್ಕಿ | ಭಾಗಾಯ್ತು | ಒಟ್ಟು |
|---|---|---|---|---|
| 1. | ಕೊಂಡಜ್ಜಿ | 0–22 1/2 | – | 0–22 1/2 |
| 2. | ಶೆಟ್ಟಿಹಳ್ಳಿ (ಶ್ರೀರಾಂಪುರ) | 0–21 | – | 0–21 |
| 3. | ರಾಯಸಂದ್ರ | 0–23 1/2 | 0–20 3/4 | 1–04 1/4 |
| | **ಒಟ್ಟು** | **1–27** | **0–20 3/4** | **2–07 1/4** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮದ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ 22 ಭೂಸ್ವಾತು 2009, ದಿನಾಂಕ: 28ನೇ ಏಪ್ರಿಲ್ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹೇಮಾವತಿ ನಾಲೆಗಾಗಿ ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894 ರ ಕಲಂ 4(1) ರ ಮೇರೆಗೆ ಅಧಿಸೂಚನೆ ಕ್ರಮಾಂಕ: ಎಲ್‌ಎಕ್ಯೂ/ಎಸ್‌ಆರ್/32/2007–08, ದಿನಾಂಕ: 19.10.2007ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ,

ಮತ್ತು ಕರ್ನಾಟಕ ಕಾಯ್ದೆ 33/1991 ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 ರ (ಕೇಂದ್ರ ಅಧಿನಿಯಮ 1894) (1) 5ಎ ಪ್ರಕರಣದ (2)ನೇ ಉಪಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಆರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ :** ತುಮಕೂರು **ತಾಲ್ಲೂಕು :** ತುರುವೇಕೆರೆ **ಹೋಬಳಿ :** ದಂಡಿನಶಿವರ/ಕಸಬ **ಗ್ರಾಮ :** ಕೊಂಡಜ್ಜಿ, ಶೆಟ್ಟಿಹಳ್ಳಿ (ಶ್ರೀರಾಂಪುರ), ರಾಯಸಂದ್ರ

| ಕ್ರ. ಸಂ. | ಅನುಭವದಾರರ ಹೆಸರು | ಸ.ನಂ. | ತರಹೆ | ವಿಸ್ತೀರ್ಣ ಎ–ಗುಂ |
|---|---|---|---|---|
| | **1. ಗ್ರಾಮ: ಕೊಂಡಜ್ಜಿ** | | | |
| 1. | ಕೆ.ಜಿ. ಗಂಗಾಧರಯ್ಯ, ಕೆ.ಜಿ. ದೇವೇಗೌಡ, ಕೆ.ಜಿ. ತಮ್ಮೇಗೌಡ, ನಂಜಮ್ಮ, ಚಿಕ್ಕೇಗೌಡ, ಕೆಂಪಮ್ಮ ಕೋಂ ಎಲ್. ರಂಗಪ್ಪ, ಪರಮೇಶ್, ಬ್ಯಾಟಪ್ಪ | 274 | ಖುಷ್ಕಿ | 0–00 1/2 |
| 2. | ಗಂಗಾಧರಯ್ಯ, ಕೆ.ಜಿ. ಗಂಗಾಧರಯ್ಯ, ಪರಮೇಶ್, ಬ್ಯಾಟಪ್ಪ ಗಿರಿಯಪ್ಪ | 277/1 | ಖುಷ್ಕಿ | 0–09 |
| 3. | ರಂಗಪ್ಪ, ಗಂಗಣ್ಣ | 304/1 | ಖುಷ್ಕಿ | 0–02 |
| 4. | ಚನ್ನಮ್ಮ ಕೋಂ ನಂಜಪ್ಪ | 304/2 | ಖುಷ್ಕಿ | 0–01 |
| 5. | ಲಕ್ಷ್ಮಮ್ಮ | 305/1 | ಖುಷ್ಕಿ | 0–02 |
| 6. | ಗೋವಿಂದಯ್ಯ, ಜಗದೀಶ ಮೈ.ಗಾ ತಿಮ್ಮನಾಯ್ಕ | 619 | ಖುಷ್ಕಿ | 0–03 1/2 |

| ಕ್ರ. ಸಂ. | ಅನುಭವದಾರರ ಹೆಸರು | ಸ.ನಂ. | ತರಹೆ | ವಿಸ್ತೀರ್ಣ ಎ–ಗುಂ |
|---|---|---|---|---|
| 7. | ಚಿಕ್ಕೇಗೌಡ, ಪುಟ್ಟಶ್ಯಾಮಯ್ಯ, ಶಿವಣ್ಣ, ಸಣ್ಣಲಿಂಗಯ್ಯ, ಲಕ್ಷ್ಮಮ್ಮ ಗಂಗಾಧರ | 618/2 | ಖುಷ್ಕಿ | 0–01 1/2 |
| 8. | ಕೆ.ಜಿ. ಶಂಕರೇಗೌಡ | 622/2 | ಖುಷ್ಕಿ | 0–03 |
| | **ಒಟ್ಟು** | | | **0–22 1/2** |
| | **2. ಗ್ರಾಮ: ಶೆಟ್ಟಿಹಳ್ಳಿ (ಶ್ರೀರಾಂಪುರ)** | | | |
| 9. | ಗೋಮಾಳ, ಸಿದ್ದರಾಮಯ್ಯ, ಗಂಗಣ್ಣ | 11 | ಖುಷ್ಕಿ | 0–14<br>0–07 |
| | **ಒಟ್ಟು** | | | **0–21** |
| | **3. ಗ್ರಾಮ: ರಾಯಸಂದ್ರ** | | | |
| 10. | ಟಿ. ತಿಮ್ಮಯ್ಯ, ಎಂ. ಗೋಪಿನಾಥ, ಎಂ.ಎಸ್. ಮುರಳೀಧರ, ಶಿವಣ್ಣ, ಶಿವಗಂಗಮ್ಮ, ಮಹದೇವಯ್ಯ, ಸುನಂದ ಎಂ.ಎಸ್. ಸಣ್ಣಪ್ಪಯ್ಯ | 78 | ಖುಷ್ಕಿ | 0–18 |
| 11. | ಆರ್.ಎನ್. ಮಲ್ಲಿಕಾರ್ಜುನಯ್ಯ, ಆರ್.ಎನ್. ಶಿವನಂಜಪ್ಪ | 79/2 | ಭಾಗಾಯ್ತು | 0–05 |
| 12. | ಗಂಗಾಧರಯ್ಯ, ಎಂ.ಎಸ್. ದಿವಾಕರ, ಆರ್.ಸಿ. ಪ್ರಭುಸ್ವಾಮಿ ಗಂಗಮ್ಮ | 79/3ಬಿ | ಭಾಗಾಯ್ತು | 0–05 |
| 13. | ಸ್ಮಿತಾ, ಸಂತೋಷ್ | 80/2 | ಭಾಗಾಯ್ತು | 0–06 |
| 14. | ಸಣ್ಣಗಂಗಮ್ಮ | 81/1 | ಭಾಗಾಯ್ತು | 0–03 1/2 |
| 15. | ನಂಜುಂಡಮ್ಮ | 81/2 | ಖುಷ್ಕಿ | 0–02 1/2 |
| 16. | ನಂಜುಂಡಮ್ಮ | 83/1 | ಭಾಗಾಯ್ತು | 0–01 1/4 |
| 17. | ನಂಜಯ್ಯ | 105 | ಖುಷ್ಕಿ | 0–03 |
| | **ಒಟ್ಟು** | | | **1–04 1/4** |

**ಘೋಷ್ವಾರೆ**

| ಕ್ರ. ಸಂ. | ಗ್ರಾಮಗಳು | ಖುಷ್ಕಿ | ಭಾಗಾಯ್ತು | ಒಟ್ಟು |
|---|---|---|---|---|
| 1. | ಕೊಂಡಜ್ಜಿ | 0–22 1/2 | – | 0–22 1/2 |
| 2. | ಶೆಟ್ಟಿಹಳ್ಳಿ (ಶ್ರೀರಾಂಪುರ) | 0–21 | – | 0–21 |
| 3. | ರಾಯಸಂದ್ರ | 0–23 1/2 | 0–20 3/4 | 1–04 1/4 |
| | **ಒಟ್ಟು** | **1–27 1/2** | **0–20 3/4** | **2–07 1/4** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 219

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

## ಕಂದಾಯ ಸಚಿವಾಲಯ

### ಭೂ ಸ್ವಾಧೀನ ಕಾಯ್ದೆ ಕಲಂ 6(1)ರ ಪ್ರಕರಣದ ಮೇರೆಗೆ ಘೋಷಣೆ

**ಕಂಇ 15 ಭೂಸ್ವಾಶಿ 2009, ದಿನಾಂಕ: 28ನೇ ಮೇ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ತೀರ್ಥಹಳ್ಳಿ ತಾಲ್ಲೂಕು ಹೊಸಹಳ್ಳಿ ಏತ ನೀರಾವರಿ ನಿರ್ಮಾಣಕ್ಕಾಗಿ ಅಗತ್ಯವಾಗಿದ್ದವು ಎಂದು ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂ ಸ್ವಾಧೀನ ಕಾಯ್ದೆ 1894 ರ ಕಲಂ 4(1)ರ ಮೇರೆಗೆ ಅಧಿಸೂಚನೆ ಕ್ರಮಾಂಕ ಆರ್(3) ಎಲ್.ಎ.ಕ್ಯೂ. ಎಸಾರ್ 2/07–08 ದಿನಾಂಕ: 21.2.2008 ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ ಮತ್ತು ಕರ್ನಾಟಕ ಕಾಯ್ದೆ 33: 1991 ರನ್ವಯ ತಿದ್ದುಪಡಿಯಾದ ಭೂ ಸ್ವಾಧೀನ ಕಾಯ್ದೆ 1894ರ (ಕೇಂದ್ರ ಕಾಯ್ದೆ 1894ರ (1) 5ಎ ಪ್ರಕರಣದ (2)ನೇ ಉಪ ಪ್ರಕರಣದ ಮತ್ತು 6(1)ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಸ್ವಾಧೀನ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ, ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿದೆ ಎಂದು ಸದರಿ ಕಾಯ್ದೆ ಕಲಂ 6ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ಉಪ ವಿಭಾಗಾಧಿಕಾರಿಗಳು ಹಾಗೂ ಭೂ ಸ್ವಾಧೀನಾಧಿಕಾರಿಗಳು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಸ್ವಾಧೀನ ಕಾಯ್ದೆ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ. ಹಾಗೂ ಸದರಿ ಭೂಮಿಯ ಸ್ವಾಧೀನಕ್ಕೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಕಾಯ್ದೆಯ ಕಲಂ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ಉಪ ವಿಭಾಗಾಧಿಕಾರಿಗಳು ಹಾಗೂ ಭೂ ಸ್ವಾಧೀನಾಧಿಕಾರಿಗಳು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ಶಿವಮೊಗ್ಗ** **ತಾಲ್ಲೂಕು: ಶಿವಮೊಗ್ಗ** **ಹೋಬಳಿ: ಮತ್ತೂರು** **ಗ್ರಾಮ: ಮುಂಡುವಳ್ಳಿ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ವಿಸ್ತೀರ್ಣ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1 | ಹೆಚ್.ಜಿ. ಗೋಪಾಲನಾಯ್ಕ ಬಿನ್ ಗುಂಡನಾಯ್ಕ | ಸ್ವಂತ | 29 | ತರಿ | 0–06 | 0–74 | 294<br>43 | 30/2<br>29/4 | 30/2<br>29/4 | 29/2<br>29/5 |
| 2. | ಹೆಚ್.ಎಸ್. ಪ್ರವೀಣ ಬಿನ್ ಶಿವಪ್ಪ ಗೌಡ | ಸ್ವಂತ | 29 | ತರಿ | 0–04 | 0–62 | 2915 | 29/2 | 29/4 | 29/4 |
| 3. | ಹೆಚ್.ಜಿ. ಗೋಪಾಲನಾಯ್ಕ ಬಿನ್ ಗುಂಡಪ್ಪಗೌಡ | ಸ್ವಂತ | 30 | ತರಿ | 0–01 | 0–12 | 29/2 | 34 | 30/2 | 30/2 |
| 4. | ತಮ್ಮಯ್ಯಗೌಡ ಬಿನ್ ಲೋಕಪ್ಪ ಗೌಡ | ಪ್ರಕಾಶ ಬಿನ್ ತಮ್ಮಯ್ಯ | 34 | ತರಿ | 0–02 | 0–24 | 143<br>34 | 34 | 34 | 34 |
| 5. | ಹೆಚ್.ಪಿ. ಮಹೇಶ ಬಿನ್ ಪುಟ್ಟೇಗೌಡ | ಸ್ವಂತ | 34 | ತರಿ | 0–08 | 30/2 | 34 | 34 | 34 | 33 |
| 6. | ಸರ್ಕಾರಿ | ಸರ್ಕಾರಿ | 43 | ತರಿ | 0–08 | – | 144 | ತುಂಗಾನದಿ | 43 | 35 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ವಿಸ್ತೀರ್ಣ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 7. | ಹೆಚ್.ಸಿ. ವೆಂಕಟಪ್ಪಗೌಡ ಬಿನ್ ಚನ್ನಪ್ಪಗೌಡ | ಸ್ವಂತ | 143 | ತರಿ | 0–02 | 0–01 | 34 | 34 | 143 | 143 |
| 8. | ಎ.ಕೆ. ಯಲ್ಲಪ್ಪ ಬಿನ್ ಭರ್ಮಣ್ಣ | ಸ್ವಂತ | 143 | ತರಿ | 0–02 | 0–01 | 143 | 144 | 143 | 143 |
| 9. | ಜೆ.ಸಿ. ಬಸವರಾಜಪ್ಪ ಬಿನ್ ಚನ್ನಬಸಪ್ಪ | ಸ್ವಂತ | 144 | ಖುಷ್ಕಿ | 0–16 | 0–11 | 143 | 43 | 144 | 35 |
| | **ಒಟ್ಟು ವಿಸ್ತೀರ್ಣ** | | | | **1–09** | | | | | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 224

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು.**

**ಭೂಆರ್ಜನೆ ಅಧಿನಿಯಮ 4(1) ನೇ ಪ್ರಕರಣದ ಮೇರೆಗೆ ಅಧಿಸೂಚನೆ.**

**ಕ್ರಮಾಂಕ: ಎಲ್ಎಕ್ಯೂ: ಎಸ್ಆರ್: 7/2009–10, ದಿನಾಂಕ: 14ನೇ ಮೇ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕಳ್ಳಂಬೆಳ್ಳ ಮತ್ತು ಭೂಪಸಂದ್ರ ಗ್ರಾಮದ ಕೆಲವು ಸ.ನಂ.ಗಳ ಜಮೀನಿಗೆ ಕಳ್ಳಂಬೆಳ್ಳ ಕೆರೆಯಿಂದ ಅಜ್ಜೇನಹಳ್ಳಿ ಕೆರೆಗೆ ಫೀಡರ್ ಚಾನೆಲ್ ಮುಖಾಂತರ ನೀರು ಹರಿಸಲು ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಗೆ ಕಂಡು ಬಂದಿರುವುದರಿಂದ ಕರ್ನಾಟಕ ಕಾಯಿದೆ 33:1991 ರ ಅನ್ವಯ ತಿದ್ದುಪಡಿಯಾದ ಕೇಂದ್ರ ಅಧಿನಿಯಮ 1894 ರ 4ನೇ ಪ್ರಕರಣದ (1) ನೇ ಉಪಪ್ರಕರಣದ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸುಗಳನ್ನು ಕೊಡಲಾಗಿದೆ. ಹಾಗೂ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರುರವರು ಅಧಿನಿಯಮದ 4(2) ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಮಧುಗಿರಿ ಉಪ ವಿಭಾಗ, ಮಧುಗಿರಿ ಹಾಗೂ ಅವರ ಸಿಬ್ಬಂದಿ ಮತ್ತು ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತಾರೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರುರವರು ಅಧಿನಿಯಮ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಉಪವಿಭಾಗಾಧಿಕಾರಿಗಳು, ಮಧುಗಿರಿ ಇವರನ್ನು ನೇಮಕ ಮಾಡಿರುತ್ತಾರೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಈ ಅಧಿಸೂಚನೆ ಪ್ರಕಟಗೊಂಡ ತಾರೀಖಿನಿಂದ 30 ದಿನಗಳ ಒಳಗಾಗಿ ಅಥವಾ ಅದಕ್ಕೆ ಮುಂಚೆ ಕರ್ನಾಟಕ ಕಾಯಿದೆ 33:1991 ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಕೇಂದ್ರ ಅಧಿನಿಯಮ 1894ರ 3 (ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಉಪವಿಭಾಗಾಧಿಕಾರಿಗಳು, ಮಧುಗಿರಿ ಇವರಿಗೆ ಲಿಖಿತವಾಗಿ ಸಲ್ಲಿಸಬಹುದು.

ಭೂಆರ್ಜನೆ ಉದ್ದೇಶಕ್ಕಾಗಿ ಘೋಷಿತ ಭೂಮಿಗಳ ಮೇಲೆ ನಿಯೋಜಿತರಾದ ಯಾವನೇ ಮೋಜಣಿದಾರ ಅಥವಾ ಇತರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಪ್ರಕಟಿತ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಪ್ರಕಟಿತ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಆರ್ಜನೆ ಮಾಡಿಕೊಳ್ಳಲಾಗುವ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಭೂ ಆರ್ಜನೆ ಅಧಿನಿಯಮದ (7ನೇ ಖಂಡದ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಮಧುಗಿರಿ ಉಪ ವಿಭಾಗ, ಮಧುಗಿರಿ ಇವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕ್ಷೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ :** ತುಮಕೂರು **ತಾಲ್ಲೂಕು :** ಶಿರಾ **ಹೋಬಳಿ :** ಕಳ್ಳಂಬೆಳ್ಳ **ಗ್ರಾಮ :** ಕಳ್ಳಂಬೆಳ್ಳ ಮತ್ತು ಭೂಪಸಂದ್ರ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ವಿಸ್ತೀರ್ಣ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | | ಎ–ಗುಂ | ರೂ. ಪೈ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8ಎ | 8ಬಿ | 8ಸಿ | 8ಡಿ |
| **ಗ್ರಾಮ : ಕಳ್ಳಂಬೆಳ್ಳ** | | | | | | | | | | |
| 1. | ಕೆ.ಎಂ. ರಾಧಾಕೃಷ್ಣ ಬಿನ್ ಕೆ.ಬಿ. ಮರುಳಪ್ಪ | ಕೆ.ಎಂ. ರಾಧಾಕೃಷ್ಣ | 223/2ಎ1 | ಖುಷ್ಕಿ | 0–12 | 2–68 | ಭೂಪಸಂದ್ರ ಗ್ರಾಮದ ಗಡಿ | ಕೆರೆ | ಸ.ನಂ. 223/2ಬಿ | ಸ.ನಂ. 223/2ಎ1 |
| 2. | ಎಂ. ಶಿವಾನಂದ ಬಿನ್ ಕೆ.ಬಿ. ಮರುಳಪ್ಪ | ಎಂ. ಶಿವಾನಂದ | 224/1 | ಖುಷ್ಕಿ | 0–12 | 3–66 | ಸ.ನಂ. 223/2ಎ1 | ಕೆರೆ | ಸ.ನಂ. 224/2 | ಸ.ನಂ. 224/1ರ ಉಳಿಕೆ |
| **ಗ್ರಾಮ: ಭೂಪಸಂದ್ರ** | | | | | | | | | | |
| 3. | ಲಕ್ಷ್ಮಯ್ಯ ಬಿನ್ ಲೇ. ಮುದ್ದಯ್ಯ ಎಂ. ಹನುಮಂತರಾಯಪ್ಪ ಬಿನ್ ಲೇ.ಮುದ್ದಯ್ಯ | ಲಕ್ಷ್ಮಯ್ಯ, ಎಂ. ಹನುಮಂತರಾಯಪ್ಪ | 58/1 | ಖುಷ್ಕಿ | 0–03 | 0–42 | ಸ.ನಂ. 58/2 | ಕಳ್ಳಂಬೆಳ್ಳ ಗ್ರಾಮದ ಗಡಿ | ಸ.ನಂ. 58/1 ರ ಉಳಿಕೆ | ಸ.ನಂ. 58/1ರ ಉಳಿಕೆ |
| 4. | ರಂಗಪ್ಪ ಬಿನ್ ಗಿರಿಯಪ್ಪ | ರಂಗಪ್ಪ | 58/2 | ಖುಷ್ಕಿ | 0–03 | 0–34 | ಸ.ನಂ. 58/3 | ಸ.ನಂ. 58/1 | ಸ.ನಂ. 58/2 ರ ಉಳಿಕೆ | ಸ.ನಂ. 58/2ರ ಉಳಿಕೆ |
| 5. | ಹೆಚ್. ರಾಮಯ್ಯ ಬಿನ್ ಹನುಮಂತಯ್ಯ | ಹೆಚ್. ರಾಮಯ್ಯ | 58/3 | ಖುಷ್ಕಿ | 0–01 | 0–06 | ಸ.ನಂ. 58/3 ರಲ್ಲಿ ಎನ್.ಹೆಚ್ 4ಗೆ ಭೂಸ್ವಾಧೀನ ವಾದ ಜಮೀನು | ಸ.ನಂ. 58/2 | ಸ.ನಂ. 58/3 ರ ಉಳಿಕೆ | ಸ.ನಂ. 58/3 ರ ಉಳಿಕೆ |

**ಹೆಚ್.ಆರ್. ಶ್ರೀನಿವಾಸ ಐ.ಎ.ಎಸ್.**
ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 227